## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 70(154)

ಮಾನ್ಯ ಸದಸ್ಯರ ಹೆಸರು : ಡಾ:ವೈ. ಎ ನಾರಾಯಣ ಸ್ವಾಮಿ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ದಿನಾಂಕ : 21.09.2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಖಾಸಗಿ ಅನುದಾನಿತ ಶಾಲೆಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿಗೆ ಕಾಲ್ಪನಿಕ ವೇತನ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಈ ಸಂಬಂಧ ಶ್ರೀ ಬಸವರಾಜ ಹೊರಟ್ಟಿ ನೇತೃತ್ವದ ಸಮಿತಿಯು ಕೊಟ್ಟಿರುವ ವರದಿ ಸರ್ಕಾರದ ಗಮನದಲ್ಲಿ ಇದೆಯೇ; | ಹೌದು. |
| (ಇ) | ಮೇಲ್ಕಂಡ ವರದಿ ಅನುಸಾರ ಕಾಲ್ಪನಿಕ ವೇತನ ಬಡ್ತಿ ನೀಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಅನುದಾನ ಸಂಹಿತೆಯ ಪ್ರಕಾರ ಅನುದಾನಕ್ಕೊಳಪಟ್ಟ ಸಿಬ್ಬಂದಿಗೆ ಅನುದಾನ ದೊರೆತ ದಿನಾಂಕದಿಂದ ಮಾತ್ರ ಕನಿಷ್ಠ ವೇತನ ನಿಗಧಿ ಮಾಡಬೇಕು ಹಾಗೂ ಹಿಂದಿನ ಸೇವಾವಧಿಯನ್ನು ಯಾವುದೇ ಸೇವಾ ಸೌಲಭ್ಯಕ್ಕೆ ಪರಿಗಣಿಸುವಂತಿಲ್ಲ. ಈ ಸಂಬಂಧ ಸರ್ಕಾರವು ದಿ:01.06.1995 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂದಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೇ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ 2014ನ್ನು ಜಾರಿಗೆ ತರಲಾಗಿದೆ.<br>ಈ ಅಧಿನಿಯಮವನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಪ್ರಶ್ನಿಸಿರುವ ರಿಟ್ ಅರ್ಜಿಗಳಾದ 21216/2014ಮತ್ತು 14307/2014 ಮತ್ತು ತತ್ಸಂಬಂಧದ ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿ:10.07.2015ರಂದು ನೀಡಿದ ತೀರ್ಪಿನಲ್ಲಿ ಸದರಿ ಅಧಿನಿಯಮವನ್ನು **"struck down"** ಮಾಡಿರುತ್ತದೆ.<br>ಮೇಲಿನ ಮಾನ್ಯ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅಪೀಲು ಸಂಖ್ಯೆ: 2476/2015 ಮತ್ತು 2467/2015ನ್ನು ದಾಖಲಿಸಿದೆ. ಮೇಲಿನ ರಿಟ್ ಅರ್ಜಿಗಳಲ್ಲಿ ನೀಡಿದ ತೀರ್ಪಿಗೆ ದಿ:27.11.2015ರಂದು ತಡೆಯಾಜ್ಞೆ ನೀಡಿರುತ್ತದೆ. ಸದರಿ ತಡೆಯಾಜ್ಞೆಯು ಪ್ರಸ್ತುತ ಜಾರಿಯಲ್ಲಿದ್ದು, ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ.<br>ಸಮಿತಿಯ ವರದಿ ಮತ್ತು ಇಲಾಖೆಗಳಲ್ಲಿನ ವಾಸ್ತವ ಅಂಕಿಅಂಶಗಳನ್ನು ಪರಿಶೀಲಿಸಲಾಗಿ, ಹಾಲಿ ನೀಡಲಾಗುತ್ತಿರುವ ವೇತನಕ್ಕೆ ಅನುದಾನ ರಹಿತ |

| | | |
|---|---|---|
| | | ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡು ವೇತನವನ್ನು ಪರಿಷ್ಕರಿಸಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕವಾಗಿ ರೂ.359.87 ಕೋಟಿಗಳ ಅನುದಾನವು ಬೇಕಾಗುತ್ತದೆ. ಆದರೆ ಅವರಿಗೆ ಹಿಂಬಾಕಿ ಮತ್ತು ಪಿಂಚಣಿಗಾಗಿ ತಗಲುವ ಅಂದಾಜು ವೆಚ್ಚವು ಪ್ರಸ್ತಾಪಿತ ರೂ.359.87 ಕೋಟಿಗಳಲ್ಲಿ ಒಳಗೊಂಡಿರುವುದಿಲ್ಲ. ಸದರಿ ಮೊತ್ತವಾದ ರೂ.359.87/- ಕೋಟಿ ಒಂದು ವರ್ಷಕ್ಕೆ ಬೇಕಾದ ಹೆಚ್ಚುವರಿ ಮೊತ್ತವಾಗುತ್ತದೆ. ಈ ಅನುಕೂಲ ಪಡೆಯುವ ಸಿಬ್ಬಂದಿ ಪೂರ್ಣ ಸೇವಾವಧಿಯಲ್ಲಿ ಪಡೆಯುವ ಮೊತ್ತದ ಒಟ್ಟು ಮೊತ್ತದ ಲೆಕ್ಕಾಚಾರ ಇಲಾಖೆಗಳಲ್ಲಿ ಇನ್ನು ಆಗಿರುವುದಿಲ್ಲ. ಹಾಗೆಯೇ ನಿವೃತ್ತಿ ಸೌಲಭ್ಯಗಳ ಒಟ್ಟಾರೆ ಆರ್ಥಿಕ ಹೊರೆ ರೂ.1637.61ಕೋಟಿ ಗಳಾಗಿದ್ದು, ಇದರ ವರ್ಷವಾರು ಆರ್ಥಿಕ ಹೊರೆ ಸಹ ಲೆಕ್ಕಹಾಕಿರುವುದಿಲ್ಲ. ಈ ಎರಡೂ ಮೊತ್ತಗಳ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಅನುದಾನ ರಹಿತ ಸೇವಾವಧಿಯ ಸಂಬಂಧ ನೀಡಬೇಕಾದ ವೇತನ ಬಾಕಿ ಮೊತ್ತ ರೂ.3083.54 ಕೋಟಿಗಳೆಂದು ಅಂದಾಜಿಸಲಾಗಿದೆ.<br>ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೆ ತರುವಲ್ಲಿ ನಿರ್ದಿಷ್ಠ ನಿಲುವನ್ನು ತಳೆಯಲು ಸಾಧ್ಯವಾಗಿರುವುದಿಲ್ಲ. |

ಸಂ:ಇಪಿ257ಎಸ್ಇಎಸ್2020

(ಎಸ್ ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ

ಹಾಗೂ ಸಕಾಲ ಸಚಿವರು